# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : **1523(1735)**
ಸದಸ್ಯರ ಹೆಸರು : ಡಾ : ಚಂದ್ರಶೇಖರ್ ಬಿ. ಪಾಟೀಲ್ (ಪದವೀಧರರ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 22.03.2021
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಸರ್ಕಾರಿ ಪ್ರೌಢ ಶಾಲೆ ಮತ್ತು ಅನುದಾನಿತ ಶಾಲೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಮುಖ್ಯ ಗುರುಗಳಿಗೆ ರೂ.500/-ಗಳ ವಿಶೇಷ ಭತ್ಯೆ ನೀಡದೇ ಇರುವುದರಿಂದ ಅವರ ಸೇವೆಯುದ್ದಕ್ಕೂ ಒಂದು ವೇತನಬಡ್ತಿ ಸಿಗದೇ ವಂಚಿತರಾಗಿದ್ದು, ಇದರಿಂದ ಕಿರಿಯ ನೌಕರರಿಗಿಂತ ಕಡಿಮೆ ಸಂಬಳ ಪಡೆಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಬಂದಿದ್ದಲ್ಲಿ ಇದನ್ನು ಸರಿಪಡಿಸಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು ಹಾಗೂ ಯಾವ ಕಾಲಮಿತಿಯೊಳಗೆ ಸರಿಪಡಿಸಲಾಗುವುದು? (ವಿವರ ನೀಡುವುದು) | ಸರ್ಕಾರದ ಆದೇಶ ಸಂಖ್ಯೆ: ಇಡಿ 264 ಎಸ್‌ಎಲ್‌ಬಿ 2012, ದಿನಾಂಕ:09/05/2012ರ ಆದೇಶದಲ್ಲಿ ಸರ್ಕಾರಿ /ಅನುದಾನಿತ ಪ್ರಾಥಮಿಕ ಶಾಲಾ ಶಿಕ್ಷಕರುಗಳಿಗೆ ರೂ.300/-, ಸರ್ಕಾರಿ / ಅನುದಾನಿತ ಪ್ರೌಢಶಾಲಾ ಸಹ ಶಿಕ್ಷಕರುಗಳಿಗೆ ರೂ.400/- ಹಾಗೂ ಸರ್ಕಾರಿ / ಅನುದಾನಿತ ಪದವಿ ಪೂರ್ವ ಕಾಲೇಜುಗಳ ಉಪನ್ಯಾಸಕರುಗಳಿಗೆ ರೂ.500/ಗಳು ಮಾತ್ರ ಅನ್ವಯವಾಗುವಂತೆ ವಿಶೇಷ ಭತ್ಯೆಗೆ ಅವಕಾಶ ಕಲ್ಪಿಸಿದೆ. ಆದರೆ ಸರ್ಕಾರದ ಆದೇಶ ಸಂಖ್ಯೆ: ಆಇ 08 ಎಸ್‌ಆರ್‌ಪಿ 2006, ದಿನಾಂಕ:29/03/2006, ಸರ್ಕಾರದ ಆದೇಶ ಸಂಖ್ಯೆ: ಆಇ 14 ಎಸ್.ಆರ್.ಪಿ 2006, ದಿನಾಂಕ:12/05/2016 ಹಾಗೂ ಸರ್ಕಾರದ ಆದೇಶ ಸಂಖ್ಯೆ: ಇಡಿ 264 ಎಸ್‌ಎಲ್‌ಬಿ 2012, ದಿನಾಂಕ:09/05/2012ರ ಆದೇಶಗಳಲ್ಲಿ ಮುಖ್ಯ ಶಿಕ್ಷಕರು / ತತ್ಸಮಾನ ವೃಂದದ ಶಿಕ್ಷಕರುಗಳಿಗೆ ವಿಶೇಷ ಭತ್ಯೆ ಕಲ್ಪಿಸಿರುವುದಿಲ್ಲ.<br>ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 06 ಎಸ್‌ಆರ್‌ಪಿ 2018, ದಿನಾಂಕ:19/04/2018ರ ಆದೇಶದಲ್ಲಿ ಇನ್ನೂ ಮುಂದೆ ಈ ಹಿಂದಿನ ಆದೇಶಗಳ ಪ್ರಕಾರ ದಿನಾಂಕ:01/04/2018 ರಿಂದ ಜಾರಿಗೆ ಬರುವಂತೆ ಯಾವ ಶಿಕ್ಷಕನೂ ಕೂಡ ವಿಶೇಷ ಭತ್ಯೆಯನ್ನು ಪಡೆಯಲು ಅರ್ಹನಿರುವುದಿಲ್ಲ.<br>ಸರ್ಕಾರದ ಆದೇಶದ ಸಂಖ್ಯೆ: ಆಇ 28 ಎಸ್‌ಆರ್‌ಪಿ 2018, ದಿನಾಂಕ:20/10/2018ರ ಆದೇಶದಲ್ಲಿ ಸರ್ಕಾರಿ /ಅನುದಾನಿತ ಪ್ರೌಢಶಾಲಾ ಶಿಕ್ಷಕರು ಮತ್ತು ಮುಖ್ಯ ಶಿಕ್ಷಕರು ಹಾಗೂ ಸರ್ಕಾರಿ /ಅನುದಾನಿತ ಪದವಿ ಪೂರ್ವ ಕಾಲೇಜಿನ ಉಪನ್ಯಾಸಕರು ಮತ್ತು ಪ್ರಾಂಶುಪಾಲರಿಗೆ |

| | | |
|---|---|---|
| | | ದಿನಾಂಕ:01/06/2016 ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಿರುವ ಒಂದು ಹೆಚ್ಚುವರಿ ವೇತನ ಬಡ್ತಿಯನ್ನು, 2018ರ ಪರಿಷ್ಕೃತ ವೇತನ ಶ್ರೇಣಿಗಳಲ್ಲಿ ಆಯಾ ಶಿಕ್ಷಕರುಗಳಿಗೆ ಅನ್ವಯಿಸುವ ವೇತನ ಶ್ರೇಣಿಯಗಳಲ್ಲಿ ಪಡೆಯುತ್ತಿರುವ ಮೂಲ ವೇತನದೊಂದಿಗೆ ದಿನಾಂಕ:01/11/2018ರಿಂದ ಜಾರಿಗೆ ಬರುವಂತೆ ಮೂಲ ವೇತನಕ್ಕೆ ವಿಲೀನಗೊಳಿಸಿದೆ. |

ಸಂಖ್ಯೆ: ಇಪಿ 77 ಎಸ್‌ಎಲ್‌ಬಿ 2021

(ಎಸ್. ಸುರೇಶ್ ಕುಮಾರ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ
ಸಕಾಲ ಸಚಿವರು